**ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ/ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, 7ನೇ ಮಹಡಿ, ಬಹುಮಹಡಿಗಳ ಕಟ್ಟಡ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆ:ಆಸಾನಿ:01:ಆಡಳಿತ–2:2009, ದಿನಾಂಕ: 2ನೇ ಜೂನ್ 2009**

**ವಿಷಯ:** ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಗುಂಪು "ಡಿ" ಹುದ್ದೆಗಳ ನೇರನೇಮಕಾತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವ ಬಗ್ಗೆ.

**ಉಲ್ಲೇಖ:** 1. ಸರ್ಕಾರ ಅಧಿಸೂಚನೆ ಸಂ:ಡಿಪಿಎಆರ್:13:ಎಸ್‌ಟಿಸಿ:2001 ದಿನಾಂಕ: 21.11.2001.

2. ಸರ್ಕಾರದ ಆದೇಶ ಸಂ:ಸಿಆಸುಇ:06:ಸಸನಿ:2001 ದಿನಾಂಕ: 13.02.2001.

3. ಸರ್ಕಾರದ ಪತ್ರದ ಸಂ.ಪಿಡಿ/05/ಎಸ್ ಎಂ ಸಿ 2007, ದಿನಾಂಕ: 29.05.2009.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಮೀಸಲಾತಿ ವರ್ಗ | ಮಹಿಳೆಯರು | ಅಡ್ಡ ಮೀಸಲಾತಿ ಇಲ್ಲದ್ದು | ಒಟ್ಟು ಹುದ್ದೆಗಳು |
|---|---|---|---|---|---|
| 1. | ಸಮೂಹ "ಡಿ" ನೌಕರ ವೇತನ ಶ್ರೇಣಿ ರೂ.4800–100–6000–125–6500–150–7100–175–7275 | ಪರಿಶಿಷ್ಟ ಜಾತಿ | 01 | 01 | 02 |
| 2. | –ಡಿಟೋ– | ಪರಿಶಿಷ್ಟ ಪಂಗಡ | 01 | 01 | 02 |

| | | | |
|---|---|---|---|
| 2 | ವಿದ್ಯಾರ್ಹತೆ | : | 7ನೇ ತರಗತಿಯಲ್ಲಿ ತೇರ್ಗಡೆಯಾಗಿರಬೇಕು. |
| 3 | ವಯೋಮಿತಿ | : | ಅರ್ಜಿ ಸಲ್ಲಿಸುವ ಕಡೆಯ ದಿನಾಂಕ:30.06.2009 ಈ ದಿನಾಂಕಕ್ಕೆ 18 ವರ್ಷಗಳು ತುಂಬಿರಬೇಕು ಮತ್ತು ಗರಿಷ್ಠ ವಯೋಮಿತಿ 40 ವರ್ಷಗಳನ್ನು ಮೀರಿರಬಾರದು. |
| 4 | ಅರ್ಜಿ ಸಲ್ಲಿಸಲು ಕಡೆಯ ದಿನಾಂಕ | : | ದಿನಾಂಕ: 30.06.2009 ಅರ್ಜಿ ಸಲ್ಲಿಸಲು ಕಡೆಯ ದಿನಾಂಕವಾಗಿದ್ದು, ಅರ್ಜಿಯನ್ನು ಕಡೆಯ ದಿನಾಂಕದಂದು ಸಂಜೆ 5.00 ಗಂಟೆಯೊಳಗೆ ನಿರ್ದೇಶಕರು ಹಾಗೂ ನೇಮಕಾತಿ ಪ್ರಾಧಿಕಾರಿ, 7ನೇ ಮಹಡಿ, ಬಹುಮಹಡಿಗಳ ಕಟ್ಟಡ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–560 001 ಇಲ್ಲಿಗೆ ತಲುಪಿಸಬೇಕು. |

**5. ನಿಬಂಧನೆಗಳು:**

(ಅ) ನೇಮಕಾತಿಯನ್ನು ನಿಗದಿಪಡಿಸಿರುವ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳ ಆಧಾರದ ಮೇರೆಗೆ ಮಾಡುವುದರಿಂದ ಸರ್ಕಾರದ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕೃತ ಅಂಕಪಟ್ಟಿಗಳನ್ನು ಸಲ್ಲಿಸಬೇಕು.

(ಆ) ಜನ್ಮ ದಿನಾಂಕವನ್ನು ನಮೂದಿಸಿರುವ ಅಂಕಪಟ್ಟಿ/ಜನನ ಪ್ರಮಾಣ ಪತ್ರ ಅಥವಾ ಶಾಲಾ ವರ್ಗಾವಣೆ ಪ್ರಮಾಣ ಪತ್ರದ (ಟಿ.ಸಿ) ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

(ಇ) ಇತ್ತೀಚೆಗೆ ಪಡೆದಿರುವ ಜಾತಿ ಪ್ರಮಾಣ ಪತ್ರವನ್ನು ಸರ್ಕಾರದ ಆದೇಶ ಸಂ:ಸಕಇ:132:ಎಸ್‌ಎಡಿ:97(1) ದಿನಾಂಕ:8.2.2000ದಲ್ಲಿ ನಿಗದಿಪಡಿಸಿರುವ ನಮೂನೆ "ಡಿ" ಯಲ್ಲಿ ತಹಶೀಲ್ದಾರರಿಂದ ಪಡೆದ ದೃಢೀಕೃತ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು.

(ಈ) ಈ ಅಧಿಸೂಚನೆಗೆ ಅನುಗುಣವಾಗಿ ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಜಾಗದಲ್ಲಿ ಸೇವೆ ಸಲ್ಲಿಸುವಂತಿರಬೇಕು.

(ಉ) ಅರ್ಜಿಯನ್ನು ಸರ್ಕಾರಿ ಮುದ್ರಣಾಲಯದಲ್ಲಿ ದೊರೆಯುವ ಅರ್ಜಿ ನಮೂನೆ (ಭಾಗ–1) ರಲ್ಲಿ ಭರ್ತಿ ಮಾಡಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

ಪಿ.ಆರ್. 407 ನೇಮಕಾತಿ ಪ್ರಾಧಿಕಾರಿ ಮತ್ತು ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಮಂಗಳೂರು ವಿಭಾಗ, ಮಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ:8:ಜಿಎನ್‌ಎಲ್:ಟಿ.ಎನ್‌ಡಿ(9):2009–10:ಎಇ–1, ಮಂಗಳೂರು, ದಿನಾಂಕ: 29ನೇ ಮೇ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 29.6.2009ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 27.6.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. KW-1 ಟೆಂಡರ್ Section 3 ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 27.6.2009ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಕಾಮಗಾರಿ ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| I | **ಲೆಕ್ಕ ಶೀರ್ಷಿಕೆ : 4216 ವಸತಿಗೃಹ** | | | | | | |
| 1 | ದಕ್ಷಿಣ ಕನ್ನಡ ಜಿಲ್ಲಾಧಿಕಾರಿಯವರ ವಸತಿಗೃಹದ ಆವರಣದಲ್ಲಿ 2 ವಸತಿಗೃಹಗಳ ನಿರ್ಮಾಣ (6ನೇ ಕರೆ) | 15.00 | ಎರಡನೇ ದರ್ಜೆ ಮೇಲ್ಪಟ್ಟು | 37,500.00 | 6 ತಿಂಗಳು | K/W-1 | 2750.00 |
| 2 | ಮಂಗಳೂರಿನ ಬೊಂದೇಲ್‌ನಲ್ಲಿ 8 ವಸತಿಗೃಹಗಳ ನಿರ್ಮಾಣ (7ನೇ ಕರೆ) | 40.00 | ಒಂದನೇ ದರ್ಜೆ ಮೇಲ್ಪಟ್ಟು | 80,000.00 | 6 ತಿಂಗಳು | K/W-2 | 3300.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್‌ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 410 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಸಮಯಾವಧಿ ವಿಸ್ತರಣೆ**

**ಸಂಖ್ಯೆ:ಲೋ.ಇ:ಮಂ.ವಿ:ಟಿ.ಎನ್.ಡಿ(3ಇ):(4ಇ):ಸಮಯಾವಧಿ ವಿಸ್ತರಣೆ:2009–10:ಎಇ1, ದಿನಾಂಕ: 3ನೇ ಜೂನ್ 2009**

ದಿನಾಂಕ:19.5.2009ರ ಸಂಯುಕ್ತ ಕರ್ನಾಟಕ ಮತ್ತು 'ಟೈಮ್ಸ್ ಆಫ್ ಇಂಡಿಯ' ಹಾಗೂ 19.5.2009ರ ಪ್ರಜಾವಾಣಿ ಮತ್ತು 18.5.2009ರ 'ಟೈಮ್ಸ್ ಆಫ್ ಇಂಡಿಯ' ದಿನಪತ್ರಿಕೆಗಳಲ್ಲಿನ ಪ್ರಕಟಣೆ ಸಂಖ್ಯೆ ಲೋ.ಇ:ಮಂ.ವಿ:ಟಿ.ಎನ್.ಡಿ(3ಇ):2009–

10:ಎಇ1 ದಿನಾಂಕ: 5.5.2009 ಮತ್ತು ಸಂಖ್ಯೆ ಲೋ.ಇ:ಮಂ.ವಿ.ಟಿ.ಎನ್.ಡಿ(4ಇ):2009–10:ಎಇ1 ದಿನಾಂಕ 5.5.2009 ಪ್ರಕಟಣೆಗಳಲ್ಲಿ ಸೂಚಿಸಿದ ಈ ಕೆಳಗಿನ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಆಹ್ವಾನಿಸಲಾದ ಟೆಂಡರ್ ಪ್ರಕಟಣೆಗೆ ಸಮಯಾವಧಿ ವಿಸ್ತರಣೆಯನ್ನು ಈ ಕೆಳಗಿನಂತೆ ಮಾಡಲಾಗಿದೆ.

| ಕ್ರ. ಸಂ. | ಕಾಮಗಾರಿ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| I | **5054 ರಸ್ತೆ ಮತ್ತು ಸೇತುವೆ** | |
| 1. | ಸುಳ್ಯ ಕ್ಷೇತ್ರದ ಸುಳ್ಯ ತಾಲ್ಲೂಕಿನ ಪಂಜ ಕಡಬ ರಸ್ತೆ ಕಿ.ಮೀ 5.60 ರಿಂದ 9.60ರ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 60.00 |
| II | **4216 ವಸತಿ ಗೃಹ** | |
| 1. | ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಉರ್ವಸ್ಟೋರ್‌ನಲ್ಲಿ ಸರಕಾರಿ 'ಸಿ' ದರ್ಜೆ ನೌಕರರಿಗಾಗಿ ವಸತಿ ಗೃಹ ನಿರ್ಮಾಣ (4ನೇ ಕರೆ) | 60.00 |
| III | **4202 ಶಿಕ್ಷಣ** | |
| 1. | ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿಯಲ್ಲಿರುವ ಸರಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸಭಾಂಗಣ ರಚನೆ ಎರಡು ಹೆಚ್ಚುವರಿ ಕೊಠಡಿ, ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗಾಗಿ ಶೌಚಾಲಯ ನಿರ್ಮಾಣ ಹಾಗೂ ಕಾಲೇಜು ಮೈದಾನದಲ್ಲಿ ಕ್ರೀಡಾಂಗಣ ನಿರ್ಮಾಣ (3ನೇ ಕರೆ) | 62.00 |
| IV | **ನಬಾರ್ಡ್ ಆರ್.ಐ.ಡಿ.ಎಫ್ 13** | |
| 1. | ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ತೆಂಕ ಎಡಪದವು ಒಡೂರು ವೆಂಕಲಿಕ ರಸ್ತೆ ಸರಪಳಿ 0.00 ರಿಂದ 2.00 ಕಿ.ಮೀ ವರೆಗೆ ಅಭಿವೃದ್ಧಿ (3ನೇ ಕರೆ) | 60.00 |

1. ದಿನಾಂಕ: 15.6.2009 ರಿಂದ 22.6.2009ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 22.6.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https//eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಷನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 411 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**[ನಮೂನೆ–1]**

**[9ನೇ ನಿಯಮ ನೋಡಿ]**

**ಪೊಲೀಸ್ ಇಲಾಖೆ**

**ಪೊಲೀಸ್ ಮಹಾನಿರೀಕ್ಷಕರವರ ಕಛೇರಿ, ಅರಣ್ಯ ಘಟಕ 5ನೇ ಮಹಡಿ, ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು–560 009**

**ಅಧಿಸೂಚನೆ**

ಪೊಲೀಸ್ ಮಹಾನಿರೀಕ್ಷಕರ ಕಛೇರಿ, ಅರಣ್ಯ ಘಟಕ, ಬೆಂಗಳೂರು ಇಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕೆಲಸ ಮಾಡುತ್ತಿರುವ **ಕೆ. ಅಂಕಪ್ಪ** ರವರ ಹೆಸರನ್ನು **ಹರ್ಷಕುಮಾರ್. ಕೆ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 78 ಪೊಲೀಸ್ ಮಹಾನಿರೀಕ್ಷಕರು ಅರಣ್ಯ ಘಟಕ, ಬೆಂಗಳೂರು.

**FORM - IV**

**(See Rule 12)**

**NOTICE**

It is hereby notified that the undersigned has changed his/her name from Smt. **SEEMA. V.SHURPALI** to **SEEMA ARVIND SAVANUR**

P.D. 79 **SEEMA. V. SHURPALI**

## ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಹಾಸನ

**ಅಧಿಸೂಚನೆ ಸಂಖ್ಯೆ 2/2009, ದಿನಾಂಕ: 27ನೇ ಮೇ 2009**

**ವಿಷಯ:** ಹಾಸನದ ತ್ವರಿತ ವಿಲೇವಾರಿ ನ್ಯಾಯಾಲಯ ನಂ.1, 2 ಮತ್ತು 3ನೇ ನ್ಯಾಯಾಲಯಗಳಿಗೆ ಖಾಲಿ ಇರುವ ಮೂರು ಶೀಘ್ರಲಿಪಿಗಾರರ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ ಜಿಓಬಿ(1) 585/2000 ದಿನಾಂಕ: 03/12/2003 ರೊಂದಿಗೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇವರ ಕಛೇರಿಯಲ್ಲಿ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ನಡವಳಿಕೆಗಳು.
2. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಜಿಓಬಿ (1) 585/2000 ದಿನಾಂಕ: 20/02/2004 ರೊಂದಿಗೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಎಲ್‌ಎಡಬ್ಲ್ಯೂ 152 ಎಲ್‌ಸಿಇ 02, ಬೆಂಗಳೂರು ದಿನಾಂಕ: 19/02/2004.

ಹಾಸನದ ತ್ವರಿತ ವಿಲೇವಾರಿ ನ್ಯಾಯಾಲಯಗಳಲ್ಲಿ ಖಾಲಿಯಿರುವ ಮೂರು ಶೀಘ್ರಲಿಪಿಗಾರರ ಹುದ್ದೆಗಳಲ್ಲಿ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸಲು ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಗೆ ಲಗತ್ತಿಸಲಾಗಿರುವ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ: 29.06.2009 ಸಂಜೆ 5.00 ಗಂಟೆ**

**ಖಾಲಿ ಇರುವ ಹುದ್ದೆಗಳ ವಿವರ**

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಸಂಚಿತ ವೇತನ |
|---|---|---|---|
| 1 | ಶೀಘ್ರಲಿಪಿಗಾರರು | 3 | ಮಾಹೆಯಾನ ರೂ.6000–00 |

**ವಿದ್ಯಾರ್ಹತೆ:**

ಅ) ಶೀಘ್ರಲಿಪಿಗಾರರು: ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಶೀಘ್ರಲಿಪಿಗಾರರು

ಅಥವಾ

ಅ) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ಆ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಪ್ರೌಢದರ್ಜೆ (Senior Grade) ಶೀಘ್ರಲಿಪಿ ಹಾಗೂ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢದರ್ಜೆ ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ವಯೋಮಿತಿ:**

ನಿವೃತ್ತ ನೌಕರರನ್ನುಳಿದು ಇತರೆಯವರಿಗೆ.

| | | | | |
|---|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ | | |
| ಗರಿಷ್ಠ ವಯೋಮಿತಿ | : | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ : 2ಬಿ : 3ಎ : 3ಬಿ | – | 38 ವರ್ಷ |
| | | ಪ.ಜಾ : ಪ.ಪಂ. : ಪ್ರ.ವರ್ಗ–1 | – | 40 ವರ್ಷ |

**ಆಯ್ಕೆ ವಿಧಾನ:**

ಶೀಘ್ರಲಿಪಿಗಾರರ ಹುದ್ದೆಗೆ ಲಿಖಿತ ಪರೀಕ್ಷೆ ಹಾಗೂ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

**ಪ್ರಮುಖ ಸೂಚನೆಗಳು:**

1) ನಿವೃತ್ತ ನೌಕರರು ತಮ್ಮ ಅರ್ಜಿಯೊಂದಿಗೆ ತಮ್ಮ ನಿವೃತ್ತಿಗೆ ಸಂಬಂಧಿಸಿದ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು.
2) ಅರ್ಜಿಯ ಮೇಲೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಅಂಟಿಸತಕ್ಕದ್ದು. ಹಾಗೂ ಅದರ ಮೇಲೆ ತಮ್ಮ ಸಹಿಯನ್ನು ಹಾಕತಕ್ಕದ್ದು.
3) ಅರ್ಜಿಯೊಂದಿಗೆ ವಿದ್ಯಾರ್ಹತೆ, ಜನ್ಮ ದಿನಾಂಕವನ್ನು ಸೂಚಿಸುವ ದಾಖಲೆ, ಅಂಕಪಟ್ಟಿ ಇವುಗಳ ಸ್ವಯಂ–ದೃಢೀಕೃತ ಪ್ರತಿಗಳನ್ನು ಲಗತ್ತಿಸತಕ್ಕದ್ದು.
4) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗೆ ಸೇರಿದ ಅಭ್ಯರ್ಥಿಗಳು ಸಂಬಂಧಿಸಿದ ಪ್ರಾಧಿಕಾರದಿಂದ ಪಡೆದ ಮೀಸಲಾತಿ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
5) ಅರ್ಜಿಯಲ್ಲಿನ ಎಲ್ಲಾ ಅಂಕಣಗಳನ್ನು ಭರ್ತಿ ಮಾಡತಕ್ಕದ್ದು. ಅಪೂರ್ಣ ಮಾಹಿತಿಯುಳ್ಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
6) ಭರ್ತಿ ಮಾಡಿದ ಅರ್ಜಿಯೊಂದಿಗೆ 6–00 ರೂಗಳ ಅಂಚೆ ಚೀಟಿ ಅಂಟಿಸಿದ ಸ್ವ–ವಿಳಾಸದ ಲಕೋಟೆಯನ್ನು ಲಗತ್ತಿಸತಕ್ಕದ್ದು.
7) ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
8) ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಿದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

9) ತಿರಸ್ಕೃತ ಅರ್ಜಿಗಳ ಬಗ್ಗೆ ಅಥವಾ ಸಂದರ್ಶನಕ್ಕೆ ಅನರ್ಹರಾದ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.

10) ಹುದ್ದೆಗಳು ಸಂಪೂರ್ಣ ತಾತ್ಕಾಲಿಕವಾಗಿದ್ದು ಯಾವುದೇ ಸಂದರ್ಭದಲ್ಲಾದರೂ ತೆಗೆದುಹಾಕುವ ನಿಬಂಧನೆಗೆ ಒಳಗಾಗಿರುತ್ತವೆ.

**ಕೆ. ಸೋಮಶೇಖರ್**

ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಹಾಸನ.

**ಅರ್ಜಿ ನಮೂನೆ**

ಗೆ::

ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಹಾಸನ.

ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

ಮಾನ್ಯರೆ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ 2/2009, ದಿನಾಂಕ: 27.05.2009ರ ಪ್ರಕಟಣೆ ಮೇರೆಗೆ ನಾನು ಮಾಹಿತಿಗಳೊಂದಿಗೆ ಶೀಘ್ರಲಿಪಿಗಾರರ ಹುದ್ದೆಗೆ ಆಯ್ಕೆ ಬಯಸಿ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | |
|---|---|---|---|---|
| 1. | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2. | ತಂದೆಯ : ತಾಯಿಯ : ಗಂಡನ ಹೆಸರು | | | |
| 3. | ಪೂರ್ಣ ವಿಳಾಸ | | | |
| 4. | ಹುಟ್ಟಿದ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ವಯಸ್ಸು (ಸೂಕ್ತ ದಾಖಲೆಯನ್ನು ಲಗತ್ತಿಸತಕ್ಕದ್ದು) | | | |
| 5. | ಲಿಂಗ | ಗಂಡು | ಹೆಣ್ಣು | |
| 6. | ಜಾತಿ | | | |
| 7. | ವಿದ್ಯಾರ್ಹತೆ | ಉತ್ತೀರ್ಣರಾದ ವರ್ಷ ಮತ್ತು ತಿಂಗಳು | ಗರಿಷ್ಠ ಅಂಕಗಳು | ಪಡೆದ ಅಂಕಗಳು |
| ಅ. | 10ನೇ ತರಗತಿ | | | |
| ಆ. | ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | | | |
| ಆ. | ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ | | | |
| ಇ. | ಕನ್ನಡ ಬೆರಳಚ್ಚು ಪ್ರೌಢದರ್ಜೆ | | | |
| ಈ. | ಆಂಗ್ಲ ಬೆರಳಚ್ಚು ಪ್ರೌಢದರ್ಜೆ | | | |
| 8. | ಇತರೆ ಹೆಚ್ಚುವರಿ ವಿದ್ಯಾರ್ಹತೆ | | | |
| 9. | ಯಾವುದಾದರೂ ಅಪರಾಧದಲ್ಲಿ ಭಾಗಿಯಾಗಿರುವರೇ? | | | |
| 10. | ನೀವು ನಿವೃತ್ತ ಸರ್ಕಾರಿ ನೌಕರರೇ? ಹೌದಾದರೆ, ಪಿಂಚಣಿ ಆದೇಶವನ್ನು ಲಗತ್ತಿಸತಕ್ಕದ್ದು. | | | |
| 11. | ಲಗತ್ತಿಸಿರುವ ದಾಖಲಾತಿಗಳು | | | |

ದಿನಾಂಕ:

ಸ್ಥಳ: ಅಭ್ಯರ್ಥಿಯ ಸಹಿ

ಪಿ.ಆರ್. 395

**ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ**

**ನಂ.14/3, 4ನೇ ಮಹಡಿ, ಸಿ.ಎಫ್.ಸಿ. ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು–1**

**ಟೆಂಡರ್: ಬಹಿರಂಗ ಹರಾಜು ಪ್ರಕಟಣೆ ಸಂಖ್ಯೆ:01/2009–10, ದಿನಾಂಕ: 27ನೇ ಮೇ 2009**

ಸಾರ್ವಜನಿಕರಿಂದ ಈ ಕೆಳಕಾಣಿಸಿರುವ ವಾಹನಗಳನ್ನು "ಎಲ್ಲಿದೆಯೋ ಹೇಗಿದೆಯೋ" ಅದೇ ಸ್ಥಿತಿಯಲ್ಲಿ ಕೆಳ ನಮೂದಿಸಿರುವ ಸ್ಥಳದಲ್ಲಿ ವಿಲೇವಾರಿ ಮಾಡಲು ಮೊಹರು ಮಾಡಿದ ಟೆಂಡರ್‌ಗಳನ್ನು (ದ್ವಿಪ್ರತಿಗಳಲ್ಲಿ) ಕಾರ್ಯಪಾಲಕ

ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರಿಂದ ಟೆಂಡರ್ ಕರೆಯಲಾಗಿದೆ. ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ ಹೆಸರು ಮತ್ತು ವಿಳಾಸ ಹಾಗೂ ವಾಹನದ ಸಂಖ್ಯೆಯನ್ನು ತಪ್ಪದೆ ನಮೂದಿಸಬೇಕು.

1. ಟೆಂಡರ್‌ದಾರರು ಖಾಲಿ ಟೆಂಡರ್ ಫಾರಂ ಕೋರಿ ಅರ್ಜಿ ಸಲ್ಲಿಸಲು ನಿಗದಿಗೊಳಿಸಿರುವ ದಿನಾಂಕ:22.06.2009 ವೇಳೆ 5.30 ಗಂಟೆಯವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಟೆಂಡರ್‌ದಾರರಿಗೆ ನೀಡಲು ನಿಗದಿಗೊಳಿಸಿರುವ ದಿನಾಂಕ:24.06.2009 ವೇಳೆ:5.30ಗಂಟೆಯವರೆಗೆ
3. ಭರ್ತಿಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ನಿಗದಿಗೊಳಿಸಿರುವ ದಿನಾಂಕ:26.06.2009 ವೇಳೆ 4.00 ಗಂಟೆಯವರೆಗೆ

| ಕ್ರ. ಸಂ. | ವಾಹನಗಳ ವಿವರಗಳು ಹಾಗೂ ಇರುವ ಸ್ಥಳ | ಪರಿಮಾಣ | ನಿಗದಿಪಡಿಸಿದ ಮೌಲ್ಯ | ಠೇವಣಿ ಮೊತ್ತ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ | ಟೆಂಡರ್ ಫಾರಂಗಳ ಬೆಲೆ ರೂ.ಗಳಲ್ಲಿ (ಹಿಂದಿರುಗಿಸುವುದಿಲ್ಲ) |
|---|---|---|---|---|---|
| 1. | ವಾಹನ ಜೀಪ್ ಸಂಖ್ಯೆ:ಎಂವೈ.ಸಿ.182 ಲೋ.ಇ ಸರ್ವಿಸ್ ಸ್ಟೇಷನ್ ಆನಂದ್‌ರಾವ್ ವೃತ್ತ, ಬೆಂಗಳೂರುನಲ್ಲಿ ಇರುತ್ತದೆ. | 1 | ರಹಸ್ಯವಾಗಿ ಇಡಲಾಗಿದೆ | 500/– | 500+12.50% |
| 2. | ವಿಲ್ಲೀಸ್ ಪೆಟ್ರೋಲ್ ಜೀಪ್ ಸಂಖ್ಯೆ: ಎಂ.ವೈ.ಪಿ–365 ಲೋ.ಇ ಸರ್ವಿಸ್ ಸ್ಟೇಷನ್ ಆನಂದ್‌ರಾವ್ ವೃತ್ತ, ಬೆಂಗಳೂರುನಲ್ಲಿ ಇರುತ್ತದೆ. | 1 | ರಹಸ್ಯವಾಗಿ ಇಡಲಾಗಿದೆ | 500/– | 500+ವ್ಯಾಟ್ 12.50% |
| 3. | ವಿಲ್ಲೀಸ್ ಪೆಟ್ರೋಲ್ ಜೀಪ್ ಸಂಖ್ಯೆ: ಎಂ.ವೈ.ಜಿ–763 ಲೋ.ಇ ಸರ್ವಿಸ್ ಸ್ಟೇಷನ್ ಆನಂದ್‌ರಾವ್ ವೃತ್ತ, ಬೆಂಗಳೂರುನಲ್ಲಿ ಇರುತ್ತದೆ. | 1 | ರಹಸ್ಯವಾಗಿ ಇಡಲಾಗಿದೆ | 500/– | 500+ವ್ಯಾಟ್ 12.50% |
| 4. | ವಿಲ್ಲೀಸ್ ಪೆಟ್ರೋಲ್ ಜೀಪ್ ಸಂಖ್ಯೆ: ಎಂ.ವೈ.ಜಿ–3211 ಲೋ.ಇ ಸರ್ವಿಸ್ ಸ್ಟೇಷನ್ ಆನಂದ್‌ರಾವ್ ವೃತ್ತ, ಬೆಂಗಳೂರುನಲ್ಲಿ ಇರುತ್ತದೆ. | 1 | ರಹಸ್ಯವಾಗಿ ಇಡಲಾಗಿದೆ | 500/– | 500+ವ್ಯಾಟ್ 12.50% |
| 5. | ಫಾರ್ಗೋ ಲಾರಿ ಎಂ.ವೈ.ಟಿ ಸಂಖ್ಯೆ: ಎಂ.ವೈ.ಟಿ–4090 ಲೋ.ಇ ಸರ್ವಿಸ್ ಸ್ಟೇಷನ್ ಆನಂದ್‌ರಾವ್ ವೃತ್ತ, ಬೆಂಗಳೂರುನಲ್ಲಿ ಇರುತ್ತದೆ. | 1 | ರಹಸ್ಯವಾಗಿ ಇಡಲಾಗಿದೆ | 1500/– | 500+ವ್ಯಾಟ್ 12.50% |

ದಿನಾಂಕ:27.06.2009 ರಂದು 11.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ಬಹಿರಂಗ ಹರಾಜನ್ನು ನಡೆಸಲಾಗುವುದು.

**ಷರತ್ತು ಮತ್ತು ನಿಬಂಧನೆಗಳು:**

1. ಟೆಂಡರ್ ಫಾರಂಗಳ ಬೆಲೆಯನ್ನು ರೂ.500+12.50% ತೆರಿಗೆ (ವ್ಯಾಟ್)ಯನ್ನು ಡಿ.ಡಿ.ರೂಪದಲ್ಲಿ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಾವತಿ ಮಾಡಿ ಟೆಂಡರ್ ದಾಖಲೆಗಳನ್ನು ಪಡೆಯಬಹುದಾಗಿದೆ.
2. ಭರ್ತಿಮಾಡಿದ ಟೆಂಡರ್‌ನ್ನು ಮೊಹರು ಮಾಡಿದ ಲಕೋಟೆಯಲ್ಲಿ ನಿಗದಿಪಡಿಸಿದ ಠೇವಣಿಯೊಂದಿಗೆ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರ್‌ನೊಂದಿಗೆ ತಪ್ಪದೇ ಸಲ್ಲಿಸಬೇಕು. ಗರಿಷ್ಠ ದರಗಳನ್ನು ನಮೂದಿಸಿದ ಟೆಂಡರ್‌ದಾರರು ನಮೂದಿಸಿದ ಮೊತ್ತದ ಶೇ.50+12.50ರಷ್ಟು ತೆರಿಗೆಯನ್ನು ಟೆಂಡರ್ ತೆರೆಯುವ ವೇಳೆಯಲ್ಲಿ ಪಾವತಿ ಮಾಡಬೇಕು. ಈ ನಿಯಮವನ್ನು ಮೊತ್ತದ ಶೇ:50+12.50ರಷ್ಟು ತೆರಿಗೆಯನ್ನು ಟೆಂಡರ್ ತೆರೆಯುವ ವೇಳೆಯಲ್ಲಿ ಪಾವತಿ ಮಾಡಬೇಕು. ಈ ನಿಯಮವನ್ನು ಪಾಲಿಸದಿದ್ದಲ್ಲಿ, ಗರಿಷ್ಠ ದರ ನಮೂದಿಸಿದ ಟೆಂಡರ್‌ಗಿದ್ದರೂ ತಿರಸ್ಕರಿಸಲಾಗುವುದು. ಉಳಿದ ಶೇ:50ರಷ್ಟು+12.50ರಷ್ಟು ತೆರಿಗೆಯ ಮೊತ್ತವನ್ನು ಟೆಂಡರ್‌ಗೆ ಸಕ್ಷಮ ಅಧಿಕಾರಿಯವರಿಂದ ಅನುಮೋದನೆ ಪಡೆದ ನಂತರ ಪಾವತಿ ಮಾಡಬೇಕು.
3. ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆಯ ಮೇಲೆ ತಪ್ಪದೆ ವಿಳಾಸ ಮತ್ತು ಸಂಬಂಧಿಸಿದ ವಾಹನದ ಹೆಸರು ಹಾಗೂ ವಾಹನದ ಸಂಖ್ಯೆ ಬರೆಯಬೇಕು. ಮೊಹರು ಮಾಡಿದ ಟೆಂಡರ್‌ಗಳನ್ನು ದಿ:27.06.2009 ರಂದು ಮಧ್ಯಾಹ್ನ

11.30 ಗಂಟೆಗೆ ನಡೆಸುವ ಬಹಿರಂಗ ಹರಾಜಿನ ನಂತರ ತೆರೆಯಲಾಗುವುದು. ಒಂದು ವೇಳೆ ಸಾಧ್ಯವಾಗದಿದ್ದಲ್ಲಿ ಮುಂದಿನ ದಿನಾಂಕವನ್ನು ತಿಳಿಸಿ ನಂತರ ಟೆಂಡರ್‌ನ್ನು ತೆರೆಯಲಾಗುವುದು.

4. ಬಹಿರಂಗ ಹರಾಜನ್ನು ದಿ:27.06.2009ರಂದು ವೇಳೆ 11.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ನೃಪತುಂಗ ರಸ್ತೆ, ಬೆಂಗಳೂರು ಇವರ ಕಛೇರಿಯಲ್ಲಿ ನಡೆಯಲಿದ್ದು, ಟೆಂಡರ್ ಸಲ್ಲಿಸಿರುವವರನ್ನು ಹೊರತುಪಡಿಸಿ ಇತರೆ ಬಿಡ್‌ದಾರರು ಭಾಗವಹಿಸಲು ಇಚ್ಚಿಸಿದಲ್ಲಿ ಪ್ರತಿಯೊಂದು ವಾಹನಕ್ಕೆ ನಿಗದಿಪಡಿಸಿರುವ ಠೇವಣಿ ಮೊತ್ತವನ್ನು ಡಿ.ಡಿ.ರೂಪದಲ್ಲಿ ಪಾವತಿ ಮಾಡಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
5. ಟೆಂಡರ್‌ನ್ನು ಸ್ವೀಕರಿಸುವ ಹಾಗೂ ತಿರಸ್ಕರಿಸುವ ಅಧಿಕಾರವು ಕೆಳ ಸಹಿ ಮಾಡಿರುವ ಅಧಿಕಾರಿಯವರಿಗೆ ಇರುತ್ತದೆ.
6. ಯಶಸ್ವಿ ಬಿಡ್ಡುದಾರರು (ಅಂದರೆ ಹೆಚ್ಚು ದರವನ್ನು ನಮೂದಿಸುವ ಬಿಡ್‌ದಾರರು) ಸ್ಥಳದಲ್ಲಿಯೇ ಪ್ರತಿಯೊಂದು ವಾಹನಕ್ಕೆ ಬಿಡ್ಡಿನ ಶೇ:50ರಷ್ಟು ಮತ್ತು ಶೇ:12.50ರಷ್ಟು ತೆರಿಗೆಯನ್ನು ಸೇರಿದಂತೆ ಪಾವತಿ ಮಾಡತಕ್ಕದ್ದು. ಉಳಿದ ಶೇ:50ರಷ್ಟು+12.50ರಷ್ಟು ತೆರಿಗೆ ಮೊತ್ತವನ್ನು ಸಕ್ಷಮ ಅಧಿಕಾರಿಯವರಿಂದ ಅನುಮೋದನೆ ಪಡೆದ ನಂತರ ಪಾವತಿ ಮಾಡಬೇಕು. ವಾಹನಗಳನ್ನು 15 ದಿನಗಳೊಳಗಾಗಿ ಪಡೆಯಬೇಕು. ತಪ್ಪಿದಲ್ಲಿ ವಾಹನಗಳ ಮೇಲೆ ದಂಡವನ್ನು ವಿಧಿಸಲಾಗುವುದು. ಒಂದು ತಿಂಗಳ ನಂತರವು ವಾಹನವನ್ನು ಪಡೆಯದಿದ್ದಲ್ಲಿ ಪಾವತಿ ಮಾಡಿದ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಆಸಕ್ತಿಯುಳ್ಳ ಬಿಡ್ಡುದಾರರು/ಟೆಂಡರ್‌ದಾರರು ಸದರಿ ವಾಹನಗಳನ್ನು ಕಛೇರಿಯ ಕಾರ್ಯನಿರ್ವಹಿಸುವ ಅವಧಿಯಲ್ಲಿ ಆನಂದ್‌ರಾವ್ ವೃತ್ತದಲ್ಲಿರುವ ಲೋ.ಇ. ವರ್ಕ್‌ಶಾಪ್ ಯಾರ್ಡ್‌ನಲ್ಲಿ ವೀಕ್ಷಿಸಬಹುದು ಹೆಚ್ಚಿನ ಮಾಹಿತಿಗಾಗಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.2 ಲೋ.ಇ, ಉತ್ತರ ಉಪವಿಭಾಗ, ಬೆಂಗಳೂರು ಇವರನ್ನು ಸಂಪರ್ಕಿಸಬಹುದು.

ಪಿ.ಆರ್. 391 ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು.

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ,**

**ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ – ಉಡುಪಿ**

**ಟೆಂಡರ್ ಮುಂದೂಡಿಕೆ**

**ನಂ/ಯುಡಿಎನ್/ಜಿಎನ್‌ಎಲ್/ಎನ್.ಐ.ಟಿ/ಯುಡಿಎನ್/ಐಎಫ್‌ಟಿ.ನಂ.1/2009–10/ಜೆಇ/ ದಿನಾಂಕ: 27ನೇ ಮೇ 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 1999 – 2000ರ ಪ್ರಕಾರ ಆಕ್ಟ್ – 2000ರ ನಿಯಮದಂತೆ ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–4 ನಿಯಮದನ್ವಯ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತರಾದ 1ನೇ ದರ್ಜೆ ಗುತ್ತಿಗೆದಾರರಿಂದ "ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್" ಮುಖಾಂತರ ಟೆಂಡರನ್ನು ದ್ವಿ – ಲಕೋಟೆ ಪದ್ದತಿಯಲ್ಲಿ ಈ ಕೆಳಗೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅರ್ಹ ಗುತ್ತಿಗೆದಾರರು ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್ http://eproc.karnataka.gov.in ಮುಖಾಂತರ ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ ವ್ಯಾಪ್ತಿಯ ಈ ಕೆಳಕಂಡ ಯಾವುದೇ ಅಥವಾ ಎಲ್ಲಾ ಕಾಮಗಾರಿಗಳ ಟೆಂಡರ್‌ನಲ್ಲಿ ಭಾಗವಹಿಸಬಹುದಾಗಿದೆ.

ಟೆಂಡರ್ ದಾಖಲೆಗಳನ್ನು ದಿ: 20.06.2009 ರಿಂದ 26.06.2009ರ ವರೆಗೆ ಕರ್ನಾಟಕ ರಾಜ್ಯ ಸರ್ಕಾರದ ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ದಾಖಲೆಯಿಂದ ನಕಲು ತೆಗೆಯುವುದು (Down load) ಮಾಡಿಕೊಳ್ಳಬಹುದಾಗಿದೆ.

ಟೆಂಡರ್ ದಾಖಲೆಗಳನ್ನು ದಿನಾಂಕ: 26.06.2009ರ 16.00 ಗಂಟೆಯವರೆಗೆ "ಇ – ಟೆಂಡರ್ ಪೋರ್ಟಲ್" ಕರ್ನಾಟಕ ರಾಜ್ಯ ಸರ್ಕಾರ ಮುಖಾಂತರ ಸಲ್ಲಿಸಬಹುದಾಗಿದೆ. ಹೆಚ್ಚಿನ ವಿವರಗಳು ಟೆಂಡರ್ ದಾಖಲೆಗಳಲ್ಲಿ ಲಭ್ಯವಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ರೂ. ಲಕ್ಷಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರ್ ಫಾರಂ |
|---|---|---|---|---|---|
| | **ಲೆಕ್ಕ ಶೀರ್ಷಿಕೆ:– ಸುವರ್ಣ ರಸ್ತೆ ಅಭಿವೃದ್ಧಿ** | | | | |
| 1. | ಉಡುಪಿ ತಾಲ್ಲೂಕು, ಸೀತಾನದಿ – ಬ್ರಹ್ಮಾವರ ರಸ್ತೆ ಅಭಿವೃದ್ಧಿ | 1,56,24,000.00 | 2,34,400.00 | 8 ತಿಂಗಳು | KW-4 |
| 2. | ಉಡುಪಿ ತಾಲ್ಲೂಕು, ನಂದಿಕೂರು – ಶಿರ್ವ ರಸ್ತೆ ಕಿ.ಮೀ. 4.00 ರಿಂದ 9.00ರ ವರೆಗೆ ಅಗಲಗೊಳಿಸಿ ಅಭಿವೃದ್ಧಿ | 1,03,05,000.00 | 2,00,000.00 | 8 ತಿಂಗಳು | KW-4 |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ರೂ. ಲಕ್ಷಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರ್ ಫಾರಂ |
|---|---|---|---|---|---|
| 3. | ಕುಂದಾಪುರ ತಾಲ್ಲೂಕು, ವಿರಾಜಪೇಟೆ – ಬೈಂದೂರು ರಸ್ತೆಯ ಕಿಮೀ. 312.40 ರಿಂದ 318.30ರ ವರೆಗೆ ಅಗಲಗೊಳಿಸಿ ಡಾಂಬರೀಕರಣ | 82,98,000.00 | 1,66,000.00 | 8 ತಿಂಗಳು | KW-3 |
| 4. | ಕಾರ್ಕಳ ತಾಲ್ಲೂಕು, ಪಡುಬಿದ್ರೆ – ಚಿಕ್ಕಲ್‌ಗುಡ್ಡೆ ರಸ್ತೆಯನ್ನು ಅಗಲಗೊಳಿಸಿ ಡಾಂಬರೀಕರಣ ಮಾಡುವುದು. (ಸೀತಾನದಿ – ಸೋಮೇಶ್ವರ) | 1,06,89,000.00 | 2,00,000.00 | 8 ತಿಂಗಳು | KW-4 |

**ಸಾಮಾನ್ಯ ನಿಯಮಗಳು:–**

1. ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಕ್ರ.ಸಂ. (1) (2) (4)ರ ಕಾಮಗಾರಿಗೆ ಉದ್ದೇಶಿಸಿರುವ ಕಾಮಗಾರಿಯ ಶೇ. 80ರಷ್ಟು ಮೊತ್ತದ ಹಾಗೂ ಕ್ರ.ಸಂ. (3)ರ ಕಾಮಗಾರಿಗೆ ಶೇ. 50ರಷ್ಟು ಮೊತ್ತದ ಇದೇ ತರಹದ ಒಂದೇ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ) "Bankers Certificate" ತಪ್ಪದೆ ನೀಡಬೇಕು.
3. ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ "ಗೆಜೆಟೆಡ್ ಅಧಿಕಾರಿಯವರಿಂದ ನೋಟರಿಯವರಿಂದ" ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ "ತಾಂತ್ರಿಕ ಬಿಡ್‌ಗಳು" ಅನರ್ಹಗೊಳ್ಳುತ್ತದೆ.
4. ಗುತ್ತಿಗೆದಾರರು ಉಕ್ಕು, ಸಿಮೆಂಟು, ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ಮತ್ತು ಯಂತ್ರೋಪಕರಣಗಳ ಬಗ್ಗೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು (ಸಾಮಗ್ರಿಗಳನ್ನು) ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
5. ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡೆಪೋಸಿಟ್, ಡಿಡಿ, ಪೇ – ಆರ್ಡರ್ ಅಥವಾ ಎನ್.ಎಸ್.ಸಿ ರೂಪದಲ್ಲಿ, (ಎನ್.ಎಸ್.ಸಿಯನ್ನು ಕೆಳಗೆ ಸಹಿದಾರರ ಹೆಸರಿಗೆ "ಪ್ಲೆಡ್ಜ್" ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
6. "ಪರ್‌ಫಾರ್ಮೆನ್ಸ್ ಸೆಕ್ಯೂರಿಟಿ" (ಸಾಧನಾ ಭದ್ರತೆ):– ಟೆಂಡರ್ ಅನುಮೋದನೆಗೊಂಡ 20 ದಿನಗಳೊಳಗೆ, ಅನುಮೋದಿತ ಟೆಂಡರ್‌ದಾರರು ಇಲಾಖೆಗೆ ಅನುಮೋದನೆಗೊಂಡ ಟೆಂಡರ್ ಮೊತ್ತದ ಶೇ. 5 ರಷ್ಟು ಹಾಗೂ ಅಸಮತೋಲನ ಟೆಂಡರ್ ಏನಾದರೂ ಇದ್ದರೆ ಇದಕ್ಕೆ ಹೆಚ್ಚುವರಿ ಭದ್ರತಾ ಠೇವಣಿಯನ್ನು ಟೆಂಡರ್ ನಿಯಮ 25.5 ಹಾಗೂ ಗುತ್ತಿಗೆ ಕರಾರು ನಿಯಮಾವಳಿಗಳ ಕ್ಲಾಸ್ – 44ರ ರೀತ್ಯಾ ಸಾಧನಾ ಭದ್ರತಾ ಠೇವಣಿ ರೂಪದಲ್ಲಿ ಪಾವತಿ ಮಾಡತಕ್ಕದ್ದು. ಇದನ್ನು ನಗದು/ಬ್ಯಾಂಕರ್ಸ್ ಚೆಕ್/ಡಿ.ಡಿ/ಪೇ – ಆರ್ಡರ್/ಬ್ಯಾಂಕ್ ಗ್ಯಾರಂಟಿ ಅಥವಾ ಪ್ಲೆಡ್ಜ್ ಎನ್.ಎಸ್.ಸಿ ರೂಪದಲ್ಲಿ ಸಲ್ಲಿಸಬಹುದಾಗಿರುತ್ತದೆ.
7. ಕಾಮಗಾರಿಯನ್ನು ಕೈಗೆತ್ತಿಕೊಳ್ಳುವ ಗುತ್ತಿಗೆದಾರರಿಂದ ಶೇ. 1 ರಷ್ಟು "ಕಾರ್ಮಿಕ ಕಲ್ಯಾಣ ಸುಂಕ" ಕಡಿತಗೊಳಿಸಲಾಗುವುದು. ಅಲ್ಲದೆ ಸದ್ರಿ ಕಾಯ್ದೆ / ಆದೇಶಗಳಿಗೆ ಅನುಗುಣವಾಗಿ ಸುಂಕವನ್ನು ಗಣನೆಗೆ ತೆಗೆದುಕೊಂಡು ಟೆಂಡರ್ ದರ ನಮೂದಿಸತಕ್ಕದ್ದೆಂದು ತಿಳಿಯಪಡಿಸಲಾಗಿದೆ.

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್ http://eproc.karnataka.gov.in ನಲ್ಲಿರುವ ಟೆಂಡರ್ ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ ಹಾಗೂ ಪ್ರಕಟಣೆಯನ್ನು http://www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

ಕಾರ್ಯನಿರ್ವಾಹಕ ಇಂಜಿನಿಯರು,

ಪಿ.ಆರ್. 392 ಲೋ.ಬಂ ಹಾಗೂ ಒ.ಜ.ಸಾ. ಇಲಾಖೆ, ಉಡುಪಿ ವಿಭಾಗ, ಉಡುಪಿ.

## ಜಂಟಿ ಕೃಷಿ ನಿರ್ದೇಶಕರ ಕಛೇರಿ, ಕೃಷಿ ಇಲಾಖೆ, ಚಿತ್ರದುರ್ಗ

## ಅಧಿಸೂಚನೆ

**ಸಂ.ಜಕೃನಿ/ಚಿ/ಲೆಕ್ಕ–3/ಅ.ಉ.ವಸ್ತು/ವಿಲೇವಾರಿ/2009–10, ದಿನಾಂಕ: 26ನೇ ಮೇ 2009**

**ವಿಷಯ:** ಈ ಕಛೇರಿಯ ಅನುಪಯುಕ್ತ ವಸ್ತುಗಳ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಕೃಷಿ ಆಯುಕ್ತರ ಕಾರ್ಯಾಲಯ, ಬೆಂಗಳೂರು ಇವರ ಪತ್ರ ಸಂ. ಸಾಮಾನ್ಯ/ಜವ/ಅನುಪ/100/2007–08, ದಿ:18.05.2009.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಜಂಟಿ ಕೃಷಿ ನಿರ್ದೇಶಕರ ಕಛೇರಿ, ಚಿತ್ರದುರ್ಗದಲ್ಲಿನ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ದಿನಾಂಕ: 10.08.09 ರಂದು ಬೆಳಿಗ್ಗೆ 11.00 ಗಂಟೆಗೆ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದುದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ ಅನುಪಯುಕ ವಸುಗಳನ್ನು ಖರೀದಿಸಬಹುದಾಗಿದೆ.

**ಹರಾಜು ವಸ್ತುಗಳ ವಿವರ**

| ಕ್ರ. ಸಂ. | ಅನುಪಯುಕ್ತ ವಸ್ತುಗಳ ವಿವರ | ಪರಿಮಾಣ | ಕ್ರ. ಸಂ. | ಅನುಪಯುಕ್ತ ವಸ್ತುಗಳ ವಿವರ | ಪರಿಮಾಣ |
|---|---|---|---|---|---|
| 1) | ಸ್ಟೀಲ್ ರಿವಾಲ್ವಿಂಗ್ ಚೇರ್ | 01 | 2) | ಬೀಗಗಳು | 02 |
| 3) | ಸ್ಟೀಲ್‌ರ್ಯಾಕ್ | 01 | 4) | ಟೀಕ್‌ವುಡ್ ಟೇಬಲ್ | 01 |
| 5) | ನೋಟೀಸ್ ಬೋರ್ಡ್ | 02 | 6) | ಟಾರ್ಚ್ | 01 |
| 7) | ಐಬ್ಯಾಕ್ ಚೇರ್ ವಿತ್ ಕುಶನ್ | 01 | 8) | S. ಟೈಪ್ ಚೇರ್ ವಿತ್ ಕುಶನ್ | 03 |
| 9) | ಆಫೀಸರ್ ರಿವಾಲ್ವಿಂಗ್ ಚೇರ್ | 02 | 10) | S. ಟೈಪ್ ಚೇರ್ ವಿತ್ ಆರ್ಮ್ಸ್ | 09 |
| 11) | ಫೋಟೋ ಫೋನೋ ಪ್ರೊಜೆಕ್ಟರ್ ವಿತ್ ಸ್ಟಾಂಡ್ | 01 | 12) | ಹ್ಯಾಲೋಜನ್ ಲ್ಯಾಂಪ್ಸ್ | 04 |
| 13) | ಫೋಟೋಫೋನೋ ಓವರ್ ಹೆಡ್ ಪ್ರಾಜೆಕ್ಟರ್ | 01 | 14) | ಸ್ಲೈಡ್ ಟ್ರಾನ್ಸ್‌ಫೆನ್ಸಿ ಬಾಕ್ಸ್ | 01 |
| 15) | ಲ್ಯಾಮಿನೇಟಿಂಗ್ ಮಿಷನ್ | 01 | 16) | ಸ್ಟೀಲ್ ಕ್ಯಾಬಿನೆಟ್ ಸರ್ವೀಸ್ ಕಿಟ್ | 01 |
| 17) | ಕ್ಯಾಷ್ ಬಾಕ್ಸ್ | 01 | 18) | ಪೋಸ್ಟರ್ ಬಯೋ ಚಾರ್ಟ್ | 01 |
| 19) | ಎಲೆಕ್ಟ್ರಾನಿಕ್ಸ್ ಬೈಂಡಿಂಗ್ ಮಿಷನ್ | 01 | | | |

ಮೇಲ್ಕಂಡ ಅನುಪಯುಕ್ತ ವಸ್ತುಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲಾಗುವುದು. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್/ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛೆಯುಳ್ಳವರು 3000/– ಮುಂಗಡ ಠೇವಣಿಯಾಗಿ ಹರಾಜಿನ ದಿನ ಬೆಳಿಗ್ಗೆ 10.00 ಗಂಟೆಗೆ ಕಟ್ಟಬೇಕು.
2) ಯಶಸ್ವಿ ಬಿಡ್ಡುದಾರರು ಮಾರಾಟ ತೆರಿಗೆಯನ್ನು ನಿಯಮದಂತೆ ಪಾವತಿಸತಕ್ಕದ್ದು.
3) ಹರಾಜಿಗೆ ಇಟ್ಟ ವಸ್ತುಗಳನ್ನು ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಕಛೇರಿಯಲ್ಲಿ ಕೆಲಸದ ದಿನಗಳಂದು ವೀಕ್ಷಿಸಬಹುದು.
4) ಹೆಚ್ಚಿನ ಹರಾಜು ನಿರ್ಣಯವನ್ನು ಅತ್ಯುನ್ನತ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.
5) ಹರಾಜಿನ ಪ್ರಕ್ರಿಯೆಯಲ್ಲಿ ಯಾವುದೇ ವಿವಾದವಾದ ಪಕ್ಷದಲ್ಲಿ ಹರಾಜನ್ನು ತಿರಸ್ಕರಿಸುವ, ಮುಂದುವರೆಸುವ ಹಾಗೂ ರದ್ದುಪಡಿಸುವ ಹಕ್ಕನ್ನು ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಇವರು ಹೊಂದಿರುತ್ತಾರೆ.
6) ಹರಾಜಿನ ಎಲ್ಲಾ ವಿಷಯಗಳಲ್ಲಿ ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಈ ತೀರ್ಮಾನಕ್ಕೆ ಬದ್ಧರಾಗಿರಬೇಕು.
7) ಹರಾಜಿಗೆ ಸಂಬಂಧಿಸಿದಂತೆ ಕೃಷಿ ಆಯುಕ್ತರು, ಬೆಂಗಳೂರು ಇವರ ಅನುಮೋದನೆ ಪಡೆದ ನಂತರ ಹೆಚ್ಚು ಬಿಡ್ ಮಾಡಿದ ಹರಾಜುದಾರರು ನಿಗದಿತ 7 ದಿನಗಳೊಳಗಾಗಿ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ಯಾವ

ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸುವುದಿಲ್ಲ ಮತ್ತು ಈ ನಿಯಮ ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

8) ಅತೀ ಹೆಚ್ಚು ಬಿಡ್ ಮಾಡಿದ ಹರಾಜುದಾರರನ್ನುಳಿದು ಉಳಿದ ಹರಾಜುದಾರರಿಗೆ ಮುಂಗಡ ಠೇವಣಿಯನ್ನು ಹರಾಜಿನ ನಂತರ ಹಿಂದಿರುಗಿಸಲಾಗುವುದು.

ಪಿ.ಆರ್. 396 ಜಂಟಿ ನಿರ್ದೇಶಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪೊಲೀಸ್ ಇಲಾಖೆ**

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು–560 001**

**ಟೆಂಡರ್ ಪ್ರಕಟಣೆ**

**ಸಂಖ್ಯೆ ಸಂಗ್ರಹ–2 (2) 62/2006–07, ದಿನಾಂಕ: 27ನೇ ಮೇ 2009**

ಪೊಲೀಸ್ ಪ್ರಧಾನ ಕಛೇರಿಯಲ್ಲಿನ ಗಣಕ ಯಂತ್ರ ಮತ್ತು ಪ್ರಿಂಟರ್‌ಗಳ ವಾರ್ಷಿಕ ನಿರ್ವಹಣೆಯ ಬಗ್ಗೆ ಬಿಡಿಭಾಗಗಳೊಂದಿಗೆ (WITH SPARES) ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| ಕ್ರ. ಸಂ. | ಗಣಕ ಯಂತ್ರಗಳ ಮಾದರಿ | ಸಂಖ್ಯೆ |
|---|---|---|
| 1. | ಪೆಂಟಿಯಂ–4 | 64 |
| | **ಒಟ್ಟು** | **64** |

| ಕ್ರ. ಸಂ. | ಪ್ರಿಂಟರ್‌ಗಳ ಮಾದರಿ | ಸಂಖ್ಯೆ |
|---|---|---|
| 1. | ಡಾಟ್ ಮ್ಯಾಟ್ರಿಕ್ಸ್ ಪ್ರಿಂಟರ್ | 46 |
| 2. | ಹೆಚ್.ಪಿ. ಡೆಸ್ಕ್ ಜೆಟ್ / ಇಂಕ್ ಜೆಟ್ ಪ್ರಿಂಟರ್ | 06 |
| 3. | ಹೆಚ್.ಪಿ. ಲೇಸರ್ ಜೆಟ್ ಪ್ರಿಂಟರ್ | 39 |
| 4. | ಹೆಚ್.ಪಿ. ನೆಟ್‌ವರ್ಕ್ ಪ್ರಿಂಟರ್ 4300 | 05 |
| 5. | ಕೋನಿಕಾ ಪ್ರಿಂಟರ್ – 1350 | 20 |
| | **ಒಟ್ಟು** | **116** |

**ಸೂಚನೆ:** ತಯಾರಿಕಾ ಘಟಕ/ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ದಿನಾಂಕ: 03.06.2009 ರಿಂದ 02.07.2009 ರವರೆಗೆ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.1,000/–ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.1,000/–ಗಳಿಗೆ ಡಿ.ಡಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.50/–ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಪ್ರತಿ ಉಪಕರಣದ ಮೌಲ್ಯಕ್ಕೆ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಠೇವಣಿಯಾಗಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ., ಸಂಸ್ಥೆಯ ಆರ್ಥಿಕ ಸ್ಥಾನಮಾನ ಮತ್ತು ಸಾಮರ್ಥ್ಯ ಪೂರ್ವಾರ್ಹತೆ, ಮಾರಾಟ ತೆರಿಗೆ, ಆದಾಯ ತೆರಿಗೆ ವಿವರಗಳು, ವಾರ್ಷಿಕ ವಹಿವಾಟು ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಮೊಹರು ಮಾಡಿದ ಕವರಿನಲ್ಲಿ ಈ ಕಛೇರಿಯ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ–1) ರವರಿಗೆ ಹೆಸರಿಸಿ, ದಿನಾಂಕ 02.07.2009 ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಲಕೋಟೆಯ ತುದಿಯಲ್ಲಿ **"ಪೊಲೀಸ್ ಪ್ರಧಾನ ಕಛೇರಿಯ ಗಣಕ ಯಂತ್ರ ಮತ್ತು ಪ್ರಿಂಟರ್‌ಗಳ ವಾರ್ಷಿಕ ನಿರ್ವಹಣೆಯ ಬಗ್ಗೆ ಅರ್ಜಿ"** ಎಂದು ನಮೂದಿಸಿರಬೇಕು. ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು. ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 03.07.2009 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ವಾರ್ಷಿಕ ನಿರ್ವಹಣಾ ಮೌಲ್ಯಕ್ಕೆ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಪರವಾಗಿ

**POLICE DEPARTMENT**

**Office of the Director General and Inspector General of Police,**

**No.2, Nrupathunga Road, Bangalore**

**TENDER NOTICE**

**No.STS-II(2)62/2006-07, Dated: 27th May 2009**

Sealed tenders are invited for AMC (WITH SPARES) for the following Computers & Printers of DG & IGP Office, Bangalore:

| Sl. No. | Computer Model | Quantity |
|---|---|---|
| 1. | PENTIUM-4 | 64 |
| | **TOTAL** | **64** |

| Sl. No. | Printer Model | Quantity |
|---|---|---|
| 1. | Dot Matrix Printer | 46 |
| 2. | HP Deskjet / Inkjet Printer | 06 |
| 3. | HP Laserjet Printer | 39 |
| 4. | HP NETWORK PRINTER – 4300 | 05 |
| 5. | KONICA PRINTER – 1350 | 20 |
| | **TOTAL** | **116** |

**NOTE:** Preference will be given to Manufacturing unit/ Reputed Agent and reputed companies.

Tender forms can be obtained from this office between 10.00 am to 4.00 pm. on any working day from 03.06.2009 to 02.07.2009. The cost of each tender form is 1,000/- (Rupees One Thousand only) payable in the form of Cash or DD which is non refundable (money order will not be accepted). The Tenderer who desires to obtain tender form by post may send DD for Rs.1,000/- drawn in favour of Director General and Inspector General of Police, Karnataka State, Bangalore, along with self addressed envelope affixing stamp of Rs.50/-. Tender should be submitted in duplicate in sealed envelope duly superscribed on the top as "Quotation for AMC of Computers & Printers for DG & IGP Office, Bangalore" with the address of the firm.

The envelope should contain duly filled tender application along with D.D. drawn in favour of Director General and Inspector General of Police, Karnataka State, Bangalore towards E.M.D. (The E.M.D. should be equivalent to 2% of value of AMC rate quoted by the tenderers) Financial Status, Technical and Service capability, Sales tax, Income tax details, Annual turnover details.

This envelope should be addressed to Inspetor General of Police, Head Quarters-I, and submit before 5.00 pm on or before 02.07.2009. Tender applications received after due date will not be considered. The received tenders in envelope will be opened in this office at 11.00 AM on 03.07.2009. Interested persons can participate in the proceedings of opening tenders.

The tenders received without separate Earnest Money Deposit (E.M.D.) in the form of Demand Draft shall run the risk of rejection. The Department will not be responsible for any delay, loss, damage or non receipt of request/ tender documents/ tender sent by posts / courier etc., Department's right to accept/ reject/ split any or all tenders without assigning any reasons is reserved.

P.R. 397 for Director General and Inspector General of Police.

**OFFICE OF THE EXECUTIVE ENGINEER, P.W.P & I.W.T.D.DIVISION , KOLAR DISTRICT-563 101.**

**Phone No. 08152 – 222022, FAX: 08152 – 227443**

**e-mail : eeklr@kpwd.gov.in. website: www.kpwd.gov.in**

**e-portal : http://eproc.karnataka.gov.in**

**INVITATION FOR TENDERS No.03 / 2009-10/ Dt.25th May 2009**

**SECTION-1: INVITATION FOR TENDERS- K.W.3 & 4**

1. The Executive Engineer, P.W.P & I.W.T.D. Division, Kolar - 563 101 invites tenders from eligible Tenderer's, for the construction of works detailed in the Table below. The Tenderer's may submit tenders

for any or all of the works given in the Table through e-procurement portal of the Government of Karnataka (Viz., http://eproc.karnataka.gov.in) **The tenderers are advised to note the minimum prequalification criteria as specified in clause-3 of the instructions to the tenderers of Standard Bidding Document K.W.4 to qualify for award of the contract.**

2. Tender Documents may be downloaded from the e-procurement portal of the Government of Karnataka from 29.06.2009 to 03.07.2009.

3. Tenders must be accompanied by earnest money deposit specified for the work in the Table below Earnest money deposit will have to be in any one of the forms as per the instructions in the e-procurement portal & shall have to be valid for 45 days beyond the validity of the Tender.

4. Tenders must be submitted online through e-procurement portal on or before 16.00 hours on 06.07.2009 & the opening of tenders will be as per the e-procurement portal guide lines.

5. The details regarding tender notification can be had from web site www.kpwd.gov.in & e-portal (Viz., http://eproc.karnataka.gov.in) & any further details can be had from the division office on all working days during office hours.

6. For down loading & uploading quiries please contact helpline Phone No. 080-22485867.

**TABLE**

| Sl. No. | Name of Work | Approxi - mate value of work (Rs. In Lakhs) | Earnest Money Deposit (Rs.in Lakhs) | Cost of Document (Rs.) | Period of completion (including Rainy season) |
|---|---|---|---|---|---|
| | **5054 – Dr. Nanjundappa Committee Report** | | | | |
| | **5054- Plan - KRDCL** | | | | |
| 1 | Improvements in selected reaches of road from Mudiyanur to Koladevi, Mandikal, Kondathimmanahalli via Amblikal & on to Punganur road in Mulbagal Taluk , Kolar District. (K.W.3) | 56.30 | 1.13 | As per e-pro. norms | 6 Months |
| | **Suvarna Rasthe Abhivruddhi Yojane works** | | | | |
| 1 | Improvements & widening from Ch. 62.40 Km of S.H. 99 of Kothapalli Masthi road in Kolar Taluk, Kolar District (K.W.3) | 54.10 | 1.09 | As per e-pro. norms | 6 Months |
| 2 | Improvements & widening from Ch. 63.50 to 65.00 Km of S.H.95 of Hosakote Venkatagirikote road in Bangarpet Taluk, Kolar District. (K.W.4) | 104.00 | 2.08 | As per e-pro. norms) | 8 Months |
| 3 | Improvements in selected reaches of Ch. 2.60 to 4.70 Km of Bangarpet Vokkaleri road in Bangarpet Taluk Kolar District (K.W.3) | 54.10 | 1.09 | As per e-pro. norms | 6 Months |
| 4 | Improvements in selected reaches of Ch.30.00 to 42.60 Km of Kothapalli Masthi road S.H.99 in Srinivasapura Taluk, Kolar District. (K.W.3) | 79.10 | 1.59 | As per e-pro. norms (vat) | 6 Months |

| Sl. No. | Name of Work | Approxi - mate value of work (Rs. In Lakhs) | Earnest Money Deposit (Rs.in Lakhs) | Cost of Document (Rs.) | Period of completion (including Rainy season) |
|---|---|---|---|---|---|
| 5 | Improvements in selected reaches of road from N.H.4 to join Tayalur road via Vegamadagu in Mulbagal Taluk, Kolar District (K.W.3) | 55.10 | 1.11 | As per e-pro. norms | 6 Months |
| 6 | Improvements in selected reaches of Kolar Malur Hosur road from Ch.26.10 to 40.60 Km in Malur Taluk, Kolar District (K.W.4) | 104.10 | 2.09 | As per e-pro. norms | 8 Months |

**Any further details can be had from the Division Office on all working days during office hours.**

P.R. 401 Executive Engineer, P.W.D. Kolar Division, Kolar.

**OFFICE OF THE EXECUTIVE ENGINEER P.W.P & I.W.T.D.DIVISION , KOLAR DISTRICT-563 101.**

**Phone No. 08152 – 222022, FAX: 08152 – 227443**

**e-mail : eeklr@kpwd.gov.in. website: www.kpwd.gov.in**

**e-portal :** http://eproc.karnataka.gov.in

**CORRIGENDUM FOR TENDER NOTIFICATION**

Ref: This office Tender Notification No.01 / 2009-10/ Dt.8th May 2009

1. Tenders for the work of "**Construction of Guest House, Rooms, V.I.P & V.V.I.P. Guest Houses @ Karnataka State Charities premises in Thirumala Thirupathi, Andhra Pradesh. Phase - I** " were invited in the above reference notification. Now the amount put to tender has been enhanced to **Rs. 21.00 Crores** & E.M.D. amount is **Rs. 31.50 Lakhs**. The date of events of tender process is same as in the ref.(1) notification.
2. The details regarding tender notification / Corrigendum can be had from web site www.kpwd.gov.in & e-portal (Viz., http://eproc.karnataka.gov.in) & any further details can be had from the division office on all working days during office hours.
3. For down loading & uploading quiries please contact helpline Phone No. 080-22485867.

**TABLE**

| Sl. No. | Name of Work | Approxi - mate value of work (Rs. In Crores) | Earnest Money Deposit (Rs.) | Cost of Document (Rs.) | Period of completion (including Rainy season) |
|---|---|---|---|---|---|
| 1 | 2 | 3 | 4 | 5 | 6 |
| 1 | Construction of Guest House, Rooms, V.I.P & V.V.I.P. Guest Houses @ Karnataka State Charities premises in Thirumala Thirupathi, Andhra Pradesh. Phase - I | 21.00 | 31.50 Lakhs | As per e-portal norms | 24 Months |

**Any further details can be had from the Division Office on all working days during office hours.**

P.R. 402 Executive Engineer, P.W.D. Kolar Division, Kolar.

**ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ, ಕೋಲಾರ ಜಿಲ್ಲೆ ಕೋಲಾರ**

**ಅಧಿಸೂಚನೆ**

**ನಂ. ಸಿಬ್ಬಂದಿ (2) ಸಿಆರ್/88/08-09, ದಿನಾಂಕ: 29ನೇ ಮೇ 2009**

**ವಿಷಯಃ** ಕೋಲಾರ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖಃ** 1. ಸರ್ಕಾರದ ಅಧಿಸೂಚನೆ ಸಂ : ಕಂ ಇ 299 ಬಿಎಸ್‌ಸಿ 2006 ದಿನಾಂಕ.3-2-2009

2. ಸರ್ಕಾರದ ಆದೇಶದ ಸಂಖ್ಯೆ ಆರ್ ಡಿ 130 ಬಿ ಎಸ್ ಸಿ 2007, ಬೆಂಗಳೂರು ದಿನಾಂಕ.4-12-2007 ಮತ್ತು 19-2-2009

ಕೋಲಾರ ಜಿಲ್ಲಾ ಘಟಕ, ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ನಿಗಧಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಗ್ರಾಮಲೆಕ್ಕಿಗರ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಕೋಲಾರ ಜಿಲ್ಲೆ ಇವರಿಗೆ **ದಿನಾಂಕ:18-7-2009 ರಂದು ಸಂಜೆ 5-00 ಗಂಟೆಯೊಳಗೆ** ಅಥವಾ ಅದಕ್ಕೂ ಮುಂಚಿತವಾಗಿ ಅಂಚೆ / ಕೊರಿಯರ್ ಮೂಲಕ ಕಳುಹಿಸುವುದು..

ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಮಾತ್ರ ಅಧಿಕಾರವಿರುತ್ತದೆ ಅರ್ಜಿಗಳನ್ನು ಮುದ್ದಾಂ ಸ್ವೀಕರಿಸಲಾಗುವುದಿಲ್ಲ.

**ಹುದ್ದೆಗಳ ವಿವರ**

| ಕ್ರ ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 1 | ಗ್ರಾಮ ಲೆಕ್ಕಿಗ | 40 | ಪಿ ಯು. ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 5800 -100-6000-125-6500-150-7100-175-7800-200-8600-225-9500-250-10500 |

**ಮೀಸಲಾತಿ ವರ್ಗೀಕರಣ**

| ಕ್ರ ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | | ಇತರೆ | ಮಹಿಳೆ | ಗ್ರಾಮೀಣ | ಅಂಗ ವಿಕಲ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನೆ ಗಳಿಂದ ನಿರಾಶ್ರಿತ ಗೊಂಡ ಅಭ್ಯರ್ಥಿ | ಒಟ್ಟು |
|---|---|---|---|---|---|---|---|---|---|---|---|
| 1 | ಗ್ರಾಮ ಲೆಕ್ಕಿಗ | 40 | ಪರಿಶಿಷ್ಟ ಜಾತಿ | 1 | 2 | 2 | 1 | - | - | - | 6 |
| | | | ಪರಿಶಿಷ್ಟ ಪಂಗಡ | 1 | 1 | - | - | - | - | - | 2 |
| | | | ಪ್ರವರ್ಗ 1 | 1 | 1 | - | - | - | - | - | 2 |
| | | | ಪ್ರವರ್ಗ 2(ಎ) | 1 | 2 | 2 | 1 | - | - | - | 6 |
| | | | ಪ್ರವರ್ಗ 2(ಬಿ) | 1 | 1 | - | - | - | - | - | 2 |
| | | | ಪ್ರವರ್ಗ 3(ಎ) | 1 | - | - | - | - | - | - | 1 |
| | | | ಪ್ರವರ್ಗ 3(ಬಿ) | 1 | - | - | - | - | - | - | 1 |
| | | | ಸಾಮಾನ್ಯ ಅಭ್ಯರ್ಥಿ. | 4 | 6 | 5 | 1 | 2 | 1 | 1 | 20 |
| | | | | | | | | | | **ಒಟ್ಟು** | **40** |

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:**

1. ಅರ್ಜಿಗಳನ್ನು ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸತಕ್ಕದ್ದು. ಹಾಗೂ ಅರ್ಜಿಗಳನ್ನು ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.
2. ವಯೋಮಿತಿ ಅರ್ಜಿಗಳನ್ನು ಸ್ವೀಕರಿಸಲು ನಿಗಧಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

   ಅ) ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

   ಆ) ಗರಿಷ್ಟ ವಯೋಮಿತಿ ಈ ಕೆಳಕಂಡಂತಿರತಕ್ಕದ್ದು.

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ , 2ಬಿ , 3ಎ, 3ಬಿ | 38 ವರ್ಷ |
| ಪ.ಜಾತಿ / ಪ. ಪಂಗಡ/ ಪ್ರ - 1 | 40 ವರ್ಷ |
| ವಿಧವೆಯರು / ಅಂಗವಿಕಲ/ | ಚಾಲ್ತಿಯಲ್ಲಿ ನಿಗಧಿ ಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |

**ಮಾಜಿ ಸೈನಿಕರು** : ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವರು ಕೇಂದ್ರ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೊ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು

**ಸರ್ಕಾರಿ ನೌಕರ** : ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಟ ವಯೋಮಿತಿಯನ್ನು ಅವನು / ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ
4. ಅಭ್ಯರ್ಥಿಗಳು ನಿಗಧಿತ ನಮೂನೆಯಲ್ಲಿ ಮಾತ್ರ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯ ವೆಬ್‌ಸೈಟ್ http://kolar.nic.in ನಿಂದ ಡೌನ್ ಲೋಡ್ ಮಾಡಿಕೊಳುವುದು. ಅರ್ಜಿಯನ್ನು ಜಿಲ್ಲಾಧಿಕಾರಿ ಕಛೇರಿಯಿಂದ ಒದಗಿಸಲಾಗುವುದಿಲ್ಲ. ಲಕೋಟೆಯ ಮೇಲೆ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಾಗಿ ಅರ್ಜಿ ಎಂದು ದಪ್ಪ ಅಕ್ಷರದಲ್ಲಿ ಬರೆದು, ಅಧ್ಯಕ್ಷರು, ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಕೋಲಾರ ಇವರಿಗೆ ಅಂಚೆ / ಕೊರಿಯರ್ ಮೂಲಕ ನಿಗಧಿಪಡಿಸಿದ ದಿನಾಂಕದೊಳಗಾಗಿ ಕಾರ್ಯಾಲಯದ ವೇಳೆಯಲ್ಲಿ ತಲುಪುವಂತೆ ಸಲ್ಲಿಸಬೇಕು
5. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಮೂಲಕ ಸಲ್ಲಿಸುವುದು.
6. ಅಭ್ಯರ್ಥಿಯು ತನ್ನ ಇತ್ತೀಚಿನ ಭಾವ ಚಿತ್ರವನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು.
7. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಯಾವುದೇ ಶಿಫಾರಸ್ಸುಗಳನ್ನು ಮಾಡಿದರೆ ಅಂತಹವರ ಅರ್ಜಿಯನ್ನು ತಿರಸ್ಕರಿಸಲಾಗುವುದು.
8. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
9. ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು, ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
10. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು ಕೋಲಾರ ರವರು ಕಾಯ್ದಿರಿಸಿ ಕೊಂಡಿರುತ್ತಾರೆ.
11. **ಅರ್ಜಿ ಶುಲ್ಕದ ವಿವರ:** ಪ.ಜಾತಿ/ ಪ. ಪಂಗಡ, ಪ್ರವರ್ಗ-1 ಅಭ್ಯರ್ಥಿಗಳು ರೂ.50-00 ಹಾಗೂ ಇತರರಿಗೆ ರೂ.100-00 ಗಳ ಡಿ ಡಿ. ಯನ್ನು ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಮಾತ್ರ ಅಧ್ಯಕ್ಷರು ಹಾಗೂ ಗ್ರಾಮಲೆಕ್ಕಾಧಿಕಾರಿಗಳ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಹಾಗೂ

ಡಿ ಡಿ. ಹಿಂದೆ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು. ಡಿ ಡಿ.ಯನ್ನು ಲಗತ್ತಿಸದ ಅರ್ಜಿಯನ್ನು ತಿರಸ್ಕರಿಸಲಾಗುವುದು..

12. ಸಹಿ ಮಾಡದ ಅರ್ಜಿಗಳನ್ನು ಹಾಗೂ ಅಂಕಣಗಳನ್ನು ಪೂರ್ಣ ಭರ್ತಿ ಮಾಡದ ಅರ್ಜಿಗಳನ್ನು ಹಾಗೂ ಸಂಬಂಧಿಸಿದ ದಾಖಲೆಗಳನ್ನು ಲಗತ್ತಿಸದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

12. ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.

13. ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳೊಳಗಿನ ಇತ್ತೀಚಿನ ನಡತೆ ಪ್ರಮಾಣ ಪತ್ರ

14 ಅಂಚೆ ವಿಳಂಬಕ್ಕೆ ಜಿಲ್ಲಾಧಿಕಾರಿಗಳ ಕಛೇರಿಯು ಜವಾಬ್ದಾರರಾಗುವುದಿಲ್ಲ.

15 **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :**

ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದಿಗೆ ಚಾಲ್ತಿಯಲ್ಲಿರುವಂತೆ ನಿಗಧಿತ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದು ಲಗತ್ತಿಸಬೇಕು. ಹಾಗೂ ರಾಜ್ಯ ಪತ್ರಾಂಕಿತ ಅಧಿಕಾರಿಗಳಿಂದ ದೃಡೀಕರಿಸಿದ ದಾಖಲೆಗಳ ಪ್ರತಿಗಳನ್ನು ಮಾತ್ರ ಲಗತ್ತಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಹಾಗೂ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆ ಅಡಿಯಲ್ಲಿ ಪರಿಗಣಿಸಲಾಗುವುದು.

| | |
|---|---|
| ಪ.ಜಾತಿ/ಪ.ಪಂಗಡ ಪ್ರವರ್ಗ-1 | ಸರ್ಕಾರದ ಅಧಿಸೂಚನೆ ಸಂ. SWD 132 SAD 97 ದಿನಾಂಕ.8-2-2000 ಕ್ರಮವಾಗಿ ನಮೂನೆ 1 ಮತ್ತು 2 ರಲ್ಲಿ |
| ಪ್ರವರ್ಗ -2ಎ, 2ಬಿ, 3ಎ, 3ಬಿ | ಸರ್ಕಾರದ ಅಧಿಸೂಚನೆ ಸಂಖ್ಯೆ..SWD 126 BCA ದಿನಾಂಕ. 13-2-2003 (ಕರ್ನಾಟಕ ಅನುಸೂಚಿತ ಜಾತಿ ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ) ನಿಯಮಗಳು 2000 ರನ್ವಯ ನಮೂನೆ-3 ರಲ್ಲಿ ಕ್ರೀಮಿಲೇಯರ್ ವ್ಯಾಪ್ತಿಗೊಳಪಡುವವರು ಮೀಸಲಾತಿಗೆ ಅರ್ಹರಾಗುವುದಿಲ್ಲ. |

**16 ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳುಃ**

ಸರ್ಕಾರಿ ಆದೇಶ ಸಂ.ಸಿಆಸುಇ-71 ಸೇನೇನಿ-2001 ದಿ.24-10-2002 ರನ್ವಯ ಈ ಮೀಸಲಾತಿಯಡಿಯಲ್ಲಿ ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

**17. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳುಃ**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**18. ಅಂಗವಿಕಲ ಅಭ್ಯರ್ಥಿಗಳುಃ**

(ಎ) (ಅ) ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ 2 ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6.60 ಅಥವಾ 20 :2000 (ಸ್ನೆಲರ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ

ಅ) 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆಗೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.

ಇ) ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದುಕೊಂಡಿರುವವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ .

(ಬಿ) ಎಲ್ಲ ಸಂದರ್ಭಗಳಲ್ಲಿ ಜೋರಾಗಿ ಮಾತನಾಡುವುದು ಕೇಳಿಸುವ ಅಥವಾ ಅರ್ಥವಾಗದ ಅಥವಾ ಎರಡೂ ಕಿವಿಗಳ ಪೈಕಿ ಉತ್ತಮವಾದ ಕಿವಿಯ ಶ್ರವಣ ಶಕ್ತಿಯು 90 ಡೆಸಿಬಲ್‌ಗಳಿಗೂ ಹೆಚ್ಚು ತಗ್ಗಿರುವ (ಅತ್ಯಂತ ಕಡಿಮೆ ಶ್ರವಣ ಶಕ್ತಿಯ) ಅಥವಾ ಎರಡೂ ಕಿವಿಗಳು ಶ್ರವಣ ಶಕ್ತಿಯನ್ನು ಕಳೆದುಕೊಂಡಿರುವ ವ್ಯಕ್ತಿ ಅಥವಾ ಜೀವನದ ಸಾಮಾನ್ಯ ಉದ್ದೇಶಗಳ ಸಂಬಂಧದಲ್ಲಿ ಶ್ರವಣೇಂದ್ರಿಯ ನಿಷ್ಕ್ರಿಯವಾಗಿದ್ದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

(ಸಿ) ಮೂಳೆಗಳು, ಮಾಂಸ ಖಂಡಗಳು ಮತ್ತು ಕೀಲುಗಳು ವಾಡಿಕೆಯ ಕಾರ್ಯ ನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿರುವರಾಗಿರುತ್ತಾರೆ.

(ಇ) ದೃಹಿಕ ಅಂಗವಿಕಲತೆ ಒಳಪಡುವ ಅಭ್ಯರ್ಥಿಗಳು ಮೂಳೆ ತಜ್ಞ (ಅರ್ಥೋಪೆಡಿಕ್ ಸರ್ಜನ್) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು ಅಲ್ಮಕೋ ಕಾನ್‌ಪುರ್ (ಡಬ್ಲ್ಯೂ ಎಚ್ ಒ ಸ್ಟಾಂಡರ್ಡ್) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.

ಸರ್ಕಾರಿ ಆದೇಶ ಸಂ.ಡಿಪಿಎಆರ್ 07 ಸೇಸೇಆ 94 ದಿನಾಂಕ.13-9-95 ರಲ್ಲಿ ನಿಗಧಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು ಮತ್ತು ಅಂಗವಿಕಲತೆ ಪ್ರಮಾಣವು ಕನಿಷ್ಟ ಶೇ.40 ರಿಂದ ಗರಿಷ್ಟ 75 ಕ್ಕಿಂತ ಹೆಚ್ಚಾಗಿರಬಾರದು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**19. ಗ್ರಾಮೀಣ ಅಭ್ಯರ್ಥಿಗಳುಃ**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್ ಎಸ್ ಎಲ್ ಸಿ. ಅಥವ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಡೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆ ಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ 2 ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ 1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್ ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ , ಪರಿಶಿಷ್ಟ ಪಂಗಡ, ಪ್ರವರ್ಗ 1 , ಪ್ರವರ್ಗ 2ಎ, 2ಬಿ , 3ಎ 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವು ನಮೂನೆ 2 ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**20. ಕನ್ನಡ ಮಾಧ್ಯಮ ಅಭ್ಯರ್ಥಿಗಳು ಃ**

ಸರ್ಕಾರದ ಅಧಿಸೂಚನೆ ಸಕಂ. ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿ.24-10-02 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ (9) (1)(ಸಿ) ರನ್ವಯ ಅಭ್ಯರ್ಥಿಯು 1 ರಿಂದ 10 ನೇ ತರಗತಿ ವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ. ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

**21. ಅರ್ಹತಾ ಷರತ್ತುಗಳು ಃ**

ಅ) ಅರ್ಜಿದಾರರು ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಅತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅಭ್ಯರ್ಥಿ ಹುದ್ದೆಗೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

**22. ಈ ಕೆಳಕಂಡ ದಾಖಲೆಗಳನ್ನು ನಿಗಧಿತ ನಮೂನೆಯ ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂಬುದಾಗಿ ಅಭ್ಯರ್ಥಿಗಳು ಖಚಿತ ಪಡಿಸಿಕೊಳ್ಳುವುದು.**

* ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ

* ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್ ಎಸ್ ಎಲ್ ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರವನ್ನು ಸಂಚಿತ ದಾಖಲೆಯ ಉದ್ಧೃತ ಭಾಗ ( Commulative Record)
* ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ , ಪ್ರವರ್ಗ 1, ಪ್ರವರ್ಗ 2ಎ , ಪ್ರವರ್ಗ 2ಬಿ , ಪ್ರವರ್ಗ 3ಎ , ಪ್ರವರ್ಗ 3ಬಿ ಯ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
* ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ 1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
* ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ
* ಅಂಗವಿಕಲರಾಗಿದ್ದಲ್ಲಿ ಪ್ರಮಾಣ ಪತ್ರ

ಮೇಲ್ಕಂಡ ದಾಖಲೆಗಳ ಫೋಟೋ ಪ್ರತಿಗಳನ್ನು ರಾಜ್ಯ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ಪ್ರತಿಗಳನ್ನು ಮಾತ್ರ ಲಗತ್ತಿಸಬೇಕು ಹಾಗೂ ಸಂಬಂಧಪಟ್ಟ ದಾಖಲೆಗಳು ಅರ್ಜಿ ಸಲ್ಲಿಸುವ ದಿನಾಂಕದಂದಿಗೆ ಚಾಲ್ತಿಯಲ್ಲಿರುವಂತೆ ಸಕ್ಷಮ ಪ್ರಾಧಿಕಾರದಿಂದ ಪಡೆದಿರತಕ್ಕದ್ದು.

ಮೇಲ್ಕಂಡ ನಿಗಧಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**23. ಇತರೆ ಸೂಚನೆಗಳು :**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ (ಜೆರಾಕ್ಸ್) ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

(2) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ದಿನ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಎನ್. ಪ್ರಭಾಕರ್**
ಅಧ್ಯಕ್ಷರು, ಗ್ರಾಮಲೆಕ್ಕಾಧಿಕಾರಿಗಳ ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ
## ಗ್ರಾಮಲೆಕ್ಕಿಗರ ನೇರ ನೇಮಕಾತಿಗೆ ಅರ್ಜಿ ನಮೂನೆ

ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ
ಪ್ರಕಟಣೆ ಸಂಖ್ಯೆ :
ಜಾಹಿರಾತು ಹೊರಡಿಸಿದ ದಿನಾಂಕ :
ಅರ್ಜಿ ಸಲ್ಲಿಸುತ್ತಿರುವ ಹುದ್ದೆಯ ಹೆಸರು :

| ಡಿ.ಡಿ. ಪಡೆದ ಬ್ಯಾಂಕ್ ಹೆಸರು | | ಸಂದಾಯ ಮಾಡಿದ ಮೊತ್ತ | ಡಿ.ಡಿ. ಸಂಖ್ಯೆ ಮತ್ತು ದಿನಾಂಕ |
|---|---|---|---|
| | | | |
| 1 | ಅರ್ಜಿದಾರನ/ಳ ಪೂರ್ಣ ಹೆಸರು | | |
| 2 | ತಂದೆ /ಪೋಷಕರ ಹೆಸರು | | |
| 3 | ಖಾಯಂ ವಿಳಾಸ | | |

